ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಗುರುವಾರ, ದಿನಾಂಕ : 10 ನೇ ಡಿಸೆಂಬರ್, 2020

ಬಿಬಿಎಂಪಿ ವ್ಯಾಪ್ತಿಯಲ್ಲಿ ಆಸ್ತಿ ತೆರಿಗೆ ವಸೂಲಾತಿ ಕುರಿತು

ಶ್ರೀ ಪಿ. ಆರ್. ರಮೇಶ್(ನಾಮನಿರ್ದೇಶನ ಹೊಂದಿದವರು) –

353 (443) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ಬಿಬಿಎಂಪಿ ವ್ಯಾಪ್ತಿಯಲ್ಲಿ ಕಳೆದ 5 ವರ್ಷಗಳಿಂದ ಆಸ್ತಿ ತೆರಿಗೆ ವಸೂಲಾತಿ ಕಡಿಮೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;ಬಂದಿದ್ದಲ್ಲಿ, ಸರ್ಕಾರದ ಕ್ರಮವೇನು; (ವಿವರ ನೀಡುವುದು)

(ಆ) ಬಿಬಿಎಂಪಿ ವ್ಯಾಪ್ತಿಯಲ್ಲಿ ಆಸ್ತಿ ತೆರಿಗೆ ಬಾಕಿ ಉಳಿಸಿಕೊಂಡಿರುವ ಸುಸ್ತಿದಾರರ ಸಂಖ್ಯೆ ಮತ್ತು ಬಾಕಿ ಇರುವ ತೆರಿಗೆಯ ಒಟ್ಟು ಮೊತ್ತ ಎಷ್ಟು; ಅತಿ ಹೆಚ್ಚು ಮೊತ್ತದ ಸುಸ್ತಿದಾರರು ಮತ್ತು ಅವರ ವರ್ಷವಾರು ಬಾಕಿ ಆಸ್ತಿ ತೆರಿಗೆ ವಿವರಗಳನ್ನು ನೀಡುವುದು;

(ಇ) ಆಸ್ತಿ ತೆರಿಗೆ ಬಾಕಿ ಉಳಿಸಿಕೊಂಡಿರುವ ಈ ಸುಸ್ತಿದಾರರ ವಿರುದ್ಧ ಸರ್ಕಾರದ ಕ್ರಮವೇನು; (ವಿವರ ನೀಡುವುದು)

(ಈ) ಆಸ್ತಿ ತೆರಿಗೆ ಬಾಕಿ ಉಳಿಸಿಕೊಂಡಿರುವ ಈ ಸುಸ್ತಿದಾರರ ಜೊತೆಯಲ್ಲಿ ಅಧಿಕಾರಿಗಳ ಒಂದು ವರ್ಗ ಶಾಮೀಲಾಗಿ ತೆರಿಗೆ ವಸೂಲಾತಿ ಕುಂಠಿತಗೊಂಡಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರದ ಕ್ರಮವೇನು; (ವಿವರ ನೀಡುವುದು)

(ಉ) ಆಸ್ತಿ ತೆರಿಗೆ ಬಾಕಿ ಉಳಿಸಿಕೊಂಡಿರುವ ಈ ಸುಸ್ತಿದಾರರಿಂದ ತೆರಿಗೆ ವಸೂಲಾತಿ ಮಾಡದ ಅಧಿಕಾರಿಗಳ ವಿರುದ್ಧ ಸೂಕ್ತ ಕ್ರಮ ಕೈಗೊಳ್ಳಲು ಸರ್ಕಾರ ಚಿಂತಿಸಿದೆಯೇ; (ವಿವರ ನೀಡುವುದು)

(ಊ) ಬಿಬಿಎಂಪಿ ವ್ಯಾಪ್ತಿಯಲ್ಲಿ ಆಸ್ತಿ ತೆರಿಗೆ ಹೆಚ್ಚಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ? (ವಿವರ ನೀಡುವುದು)